# ಕರ್ನಾಟಕ ವಿಧಾನಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | (1450+1419) |
| 2 | ಸದಸ್ಯರ ಹೆಸರು | : | ಶ್ರೀ ಎಸ್. ರುದ್ರೇಗೌಡ ಮತ್ತು ಶ್ರೀ ಕೆ.ಹರೀಶ್ ಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) |
| 3 | ಉತ್ತರಿಸುವ ದಿನಾಂಕ | 24 : | ~~..~~.09.2021 (24-09-2021) |
| 4 | ಉತ್ತರಿಸುವ ಸಚಿವರು | : | ಮಾನ್ಯ ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ ಅಧಿನಿಯಮ 1991ರ ಅಧ್ಯಾಯ-II ಸೆಷನ್ - 3(3)ಕ್ಕೆ ತಿದ್ದುಪಡಿ ತರಲು ವಿಪ ಹಕ್ಕುಬಾಧ್ಯತಾ ಸಮಿತಿಯು ತನ್ನ 94ನೇ ವರದಿಯಲ್ಲಿ ಮಾಡಿರುವ ಶಿಫಾರಸ್ಸನ್ನು ಅನುಷ್ಠಾನಕ್ಕೆ ತರಲಾಗಿದೆಯೇ; ಇಲ್ಲದಿದ್ದಲ್ಲಿ, ವಿಳಂಬಕ್ಕೆ ಕಾರಣಗಳೇನು; (ವಿವರ ನೀಡುವುದು) | ದಿನಾಂಕ: 10-10-2020 ರಂದು ಆಯೋಜಿಸಲಾಗಿದ್ದ ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿಯ ಸಾಮಾನ್ಯ ಸಭೆಯಲ್ಲಿ ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿ ಅಧಿನಿಯಮ 1991 ಮತ್ತು ನಿಯಮಗಳು 1993ರ ಅಧ್ಯಾಯ-II ಪ್ರಕರಣ 3(3)ಎ ರಂತೆ "ಮಲೆನಾಡು ಪ್ರದೇಶವನ್ನು ಭಾಗಶಃ ಅಥವಾ ಪೂರ್ಣವಾಗಿ ಪ್ರತಿನಿಧಿಸುವ ಮಂಡಳಿಯ ಅಧಿಕಾರ ವ್ಯಾಪ್ತಿಯೊಳಗೆ ತಮ್ಮ ಚುನಾವಣಾ ಕ್ಷೇತ್ರಗಳನ್ನು ಹೊಂದಿರುವ ಸಂಸತ್ತಿನ ಮತ್ತು ರಾಜ್ಯ ವಿಧಾನ ಮಂಡಲದ ಸದಸ್ಯರು" ಮಂಡಳಿಗೆ ಸದಸ್ಯರಾಗಿರತಕ್ಕದ್ದು ಎಂದು ಇರುತ್ತದೆ. ಇದನ್ನು ಚುನಾವಣಾ ಕ್ಷೇತ್ರ ಎಂದು ದಾಖಲು ಮಾಡದೇ "ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿಯ ವ್ಯಾಪ್ತಿಗೆ ಒಳಪಡುವ ಸಂಸತ್ತಿನ ಮತ್ತು ರಾಜ್ಯ ವಿಧಾನ ಮಂಡಲದ ಸದಸ್ಯರು ಮತ್ತು ರಾಜ್ಯಸಭೆ ಸದಸ್ಯರುಗಳು ಮಂಡಳಿಗೆ ಸದಸ್ಯರಾಗಿರತಕ್ಕದ್ದು ಎಂದು ಮಂಡಳಿಯ ಅಧಿನಿಯಮಕ್ಕೆ ತಿದ್ದುಪಡಿ ತರಲು ಸರ್ವಾನುಮತದಿಂದ ತೀರ್ಮಾನಿಸಲಾಗಿರುತ್ತದೆ.<br><br>ಅದರಂತೆ ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿಯ ಅಧಿನಿಯಮ 1991 ಮತ್ತು ನಿಯಮಗಳು 1993ರ ಅಧ್ಯಾಯ-II ಪ್ರಕರಣ 3(3)(ಎ) ನ್ನು ತಿದ್ದುಪಡಿ ಮಾಡಲು ದಿನಾಂಕ:30.11.2020 ರಂದು ಸರ್ಕಾರವನ್ನು ಕೋರಿರುತ್ತಾರೆ.<br><br>ಸರ್ಕಾರದ ಪತ್ರ ಸಂಖ್ಯೆ:ಪಿಡಿಎಸ್:57:ಎಂಡಿಬಿ:2020 ದಿ:12-01-2021ರಲ್ಲಿ ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿಯ ಅಧಿನಿಯಮ 1991 ಮತ್ತು ನಿಯಮಗಳು 1993ರ ಅಧ್ಯಾಯ-II ಪ್ರಕರಣ 3(3)(ಎ) ನ್ನು ತಿದ್ದುಪಡಿ ಮಾಡಿದಲ್ಲಿ ಆಗುವ ಅನುಕೂಲಗಳೇನು ಮತ್ತು ಈ ತಿದ್ದುಪಡಿ ತಂದಲ್ಲಿ ಮಲೆನಾಡು ಪ್ರದೇಶ ಅಭಿವೃದ್ಧಿ ಮಂಡಳಿಯ ತಾಲ್ಲೂಕುಗಳ ಅಭಿವೃದ್ಧಿಗೆ ಹೇಗೆ ಪೂರಕವಾಗಿರುತ್ತದೆ ಎಂಬ ಅಂಶಗಳ ಬಗ್ಗೆ ಸ್ಪಷ್ಟವಾದ ವಿವರಣೆಯನ್ನು ನೀಡುವಂತೆ ಮಂಡಳಿಯನ್ನು ಕೋರಲಾಗಿತ್ತು. ಮಂಡಳಿಯು ದಿನಾಂಕ:18.03.2021ರಲ್ಲಿ ಮಂಡಳಿಯ ಅಭಿವೃದ್ಧಿ ಕಾರ್ಯಗಳಿಗೆ ಸಲಹೆ ಮತ್ತು ಸೂಚನೆಗಳನ್ನು ನೀಡಬೇಕಾದರೆ, ಮಂಡಳಿಯು ಆಯೋಜಿಸುವ ಸಭೆ/ ಸಮಾರಂಭಗಳಿಗೆ ಅಧಿಕೃತವಾಗಿ ಆಹ್ವಾನಿಸಲು ಮತ್ತು ಸಭೆಗಳಿಗೆ ಭಾಗವಹಿಸಬೇಕಾದರೆ ಮಂಡಳಿಯ ಸದಸ್ಯರಾಗಿರುವುದು ಕಡ್ಡಾಯವಾಗಿರುತ್ತದೆ. ಮಂಡಳಿಗೆ ಸರ್ಕಾರದಿಂದ ಆಯವ್ಯಯದಲ್ಲಿ ಹಂಚಿಕೆ ಮಾಡುವ ಅನುದಾನದ ಆಧಾರದ ಮೇಲೆ ವಾರ್ಷಿಕ ಯೋಜನೆಯನ್ನು ರೂಪಿಸಲು ಮಂಡಳಿಯ ವ್ಯಾಪ್ತಿಯ ಎಲ್ಲಾ ಸದಸ್ಯರುಗಳನ್ನು ಮಂಡಳಿಯ ಸಾಮಾನ್ಯ ಸಭೆಗೆ ಆಹ್ವಾನಿಸಿ ಸಭೆಯಲ್ಲಿ ಸರ್ವಾನುಮತದಿಂದ ಅನುಮೋದನೆ ಪಡೆದ ನಂತರ, ಮಂಡಳಿಯ ಸದಸ್ಯರುಗಳಿಂದ ಪ್ರಸ್ತಾವನೆ ಪಡೆದು ಕ್ರಿಯಾ ಯೋಜನೆಯನ್ನು ರೂಪಿಸಿ ಸರ್ಕಾರದ ಅನುಮೋದನೆ ಪಡೆದು ಅನುಷ್ಠಾನಗೊಳಿಸಬೇಕಾಗುತ್ತದೆ. |

| | | |
|---|---|---|
| | | ಕಾರಣ ಮಂಡಳಿಗೆ ಕಾಮಗಾರಿಗಳ ಪ್ರಸ್ತಾವನೆ ಸಲ್ಲಿಸುವ ಸದಸ್ಯರುಗಳು ಮಂಡಳಿಯ ಅಧಿನಿಯಮದಂತೆ ಸದಸ್ಯರಾಗಿರುವುದು ಅನಿವಾರ್ಯವಾಗಿರುತ್ತದೆ ಎಂಬ ಅಂಶಗಳ ವಿವರಣೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.<br><br>ಮಂಡಳಿಯ ಪ್ರಸ್ತಾವನೆ ಹಾಗೂ ವಿಧಾನ ಪರಿಷತ್ ಹಕ್ಕು ಬಾಧ್ಯತಾ ಸಮಿತಿಯ ಶಿಫಾರಸ್ಸಿನಂತೆ ಮಂಡಳಿಯ ಅಧಿನಿಯಮ 1991ರ ಅಧ್ಯಾಯ-II ಸೆಷನ್ 3(3)ಕ್ಕೆ ತಿದ್ದುಪಡಿ ತರಲು ಸಚಿವ ಸಂಪುಟ ಟಿಪ್ಪಣಿ ಸಿದ್ಧಪಡಿಸಿ ಸಹಮತಿಗಾಗಿ ಸಂಸದೀಯ ವ್ಯವಹಾರ ಮತ್ತು ಶಾಸನ ರಚನಾ ಇಲಾಖೆಗೆ ಸಲ್ಲಿಸಲಾಗಿದ್ದು ಸಹಮತಿ ಪಡೆದ ನಂತರ ಸಚಿವ ಸಂಪುಟದಲ್ಲಿ ಮಂಡಿಸಿ ಅನುಮೋದನೆ ಪಡೆದು ವಿಧೇಯಕವನ್ನು ವಿಧಾನ ಮಂಡಲದಲ್ಲಿ ಮಂಡಿಸಲು ಕ್ರಮವಹಿಸಲಾಗುತ್ತದೆ. ಆದೇಶ ಹೊರಡಿಸಲು ಕ್ರಮ ವಹಿಸಲಾಗುತ್ತದೆ. |
| (ಆ) | ಸದರಿ ಅಧಿನಿಯಮಕ್ಕೆ ತಿದ್ದುಪಡಿಯನ್ನು ತರುವ ವಿಧೇಯಕವನ್ನು ಮಂಡಿಸಲಾಗುವುದು ಯಾವಾಗ ? | ಸಂಸದೀಯ ವ್ಯವಹಾರ ಮತ್ತು ಶಾಸನ ರಚನಾ ಇಲಾಖೆಯ ಸಹಮತಿ ನೀಡಿದ ನಂತರ ಆರ್ಥಿಕ ಇಲಾಖೆ ಸಹಮತಿ ಪಡೆದು ವಿಧಾನ ಮಂಡಲದಲ್ಲಿ ವಿಧೇಯಕವನ್ನು ಮಂಡಿಸಲಾಗುವುದು. |

ಸಂಖ್ಯೆ: ಪಿಡಿಎಸ್ 32 ಎಂಡಿಬಿ 2021

(ಮುನಿರತ್ನ)
**ಸಚಿವರು**
**ಯೋಜನೆ,ಕಾರ್ಯಕ್ರಮ**
**ಸಂಯೋಜನೆ ಮತ್ತು ಸಾಂಖ್ಯಿಕ**
**ಇಲಾಖೆ**